KA / BG-GPO/2515/WPP-47/2009-2011




# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೧೬, ೨೦೦೯ (ಚೈತ್ರ ೨೬, ಶಕ ವರ್ಷ ೧೯೩೧) | ಸಂಚಿಕೆ ೧೬ |
| --- | --- | --- |


## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(109):(ಪೂ):ಸಿ.ಆರ್.13/08–09, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2009**

**ವಿಷಯ:** ಶ್ರೀ ರಾಜಾರಾಮ್ ಮೋಹನ್‌ರಾಯ್ ವಿದ್ಯಾ ಸಂಸ್ಥೆ ರವರು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ಹೊರಮಾವು ಅಗರ ಗ್ರಾಮದ ಸ.ನಂ. 150/2 ರಲ್ಲಿನ 0–18.08 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಅಧ್ಯಕ್ಷರು, ಶ್ರೀ.ರಾಜಾರಾಮ್ ಮೋಹನ್‌ರಾಯ್ ವಿದ್ಯಾ ಸಂಸ್ಥೆ, ನಂ. 1621, ಹೆಚ್.ಬಿ.ಆರ್. ಲೇಔಟ್, ಕಲ್ಯಾಣನಗರ, ಬೆಂಗಳೂರು–43 ರವರು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ಹೊರಮಾವು ಅಗರ ಗ್ರಾಮದ ಸ.ನಂ. 150/2 ರಲ್ಲಿನ 0–18.08 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ: ಎಲ್‌ಆರ್‌ಎಫ್(109): (ಬೆ.ಪೂ)48/08–09, ದಿನಾಂಕ: 17.02.2009 ರಲ್ಲಿ ಪ್ರಸ್ತಾವಿತ ಹೊರಮಾವು ಅಗರ ಗ್ರಾಮದ ಸ.ನಂ. 150/2 ರಲ್ಲಿ 0–18.08 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: ರಿ.ನಂ.267/2000 ದಿನಾಂಕ: 16.12.2000 ರಲ್ಲಿ ಗಾಂಧಿನಗರದಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 (1) (ii) ಪ್ರಕಾರ ಶೈಕ್ಷಣಿಕ ಸಂಸ್ಥೆಗಳಿಗೆ 2 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ

80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ಹೊರಮಾವು ಅಗರ ಗ್ರಾಮದ ಸ.ನಂ. 150/2 ರಲ್ಲಿನ 0–18.08 ಗುಂಟೆ ಜಮೀನನ್ನು ಅಧ್ಯಕ್ಷರು, ಶ್ರೀ.ರಾಜಾರಾಮ್ ಮೋಹನ್‌ರಾಯ್ ವಿದ್ಯಾ ಸಂಸ್ಥೆ, ನಂ. 1621, ಹೆಚ್.ಬಿ.ಆರ್. ಲೇಔಟ್, ಕಲ್ಯಾಣನಗರ, ಬೆಂಗಳೂರು–43 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (1) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ.47/ಶಾಸನ/2001: ಬೆಂಗಳೂರು, ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಜಮೀನನ್ನು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 142

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ರದ್ದಿಯಾತಿ ಅಧಿಸೂಚನೆ**

**ಪ್ರಕರಣ ಸಂಖ್ಯೆ. ಎಲ್.ಎ.ಕ್ಯೂ.ಎಸ್.ಆರ್ 49/08–09, ದಿನಾಂಕ: 3ನೇ ಮಾರ್ಚ್ 2009**

ಭೂಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894)ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ: ಎಲ್‌ಎಕ್ಯೂ:ಎಸ್‌ಆರ್:67/2007–08, ದಿನಾಂಕ: 24.02.2008 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ: 03.04.2008ರ ಕರ್ನಾಟಕ ರಾಜ್ಯ ಪತ್ರದ ಪುಟ 542 ರಿಂದ 544 ರವರೆಗೆ ಭಾಗ–6ರಲ್ಲಿ ದಸರೀಘಟ್ಟ, ಕೈದಾಳ, ಬಜಗೂರು, ನಾಗರಘಟ್ಟ ಕಾವಲ್ ಗ್ರಾಮಗಳ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂ ಸ್ವಾಧೀನಪಡಿಸಲು ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಈ ಗ್ರಾಮಗಳ ಬಾಬ್ತು ಜಂಟಿ ಮೋಜಣಿ ಕಾರ್ಯ ಪೂರೈಸಿದಾಗ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸರ್ವೆ ನಂಬರುಗಳ ಬಾಬ್ತು ಕಲಂ 4(1) ರಂತೆ ಪ್ರಕಟಿಸಲಾದ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣ ಭೂ ಸ್ವಾಧೀನಕ್ಕೆ ಒಳಪಡುವುದೆಂದು ಕಂಡು ಬಂದಿರುವುದರಿಂದ ಕಲಂ 4(1) ರಲ್ಲಿ ಹೆಚ್ಚುವರಿಯಾಗಿ ಪ್ರಕಟವಾಗಿದ್ದು, ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ನೊಣವಿನಕೆರೆ

**ತಾಲ್ಲೂಕು:** ತಿಪಟೂರು **ಗ್ರಾಮ:** ದಸರೀಘಟ್ಟ, ಕೈದಾಳ, ಬಜಗೂರು, ನಾಗರಘಟ್ಟ ಕಾವಲ್

| ಕ್ರ. ಸಂ. | 4(1)ರ ಕ್ರ. ಸಂ. | ಹಿಡುವಳಿದಾರರ ಹೆಸರುಗಳು | ಸ.ನಂ. | ಭೂ ಸ್ವಾಧೀನಕ್ಕೊಳಪಡದ ಕಡಿಮೆಯಾದ ವಿಸ್ತೀರ್ಣ |
|---|---|---|---|---|
| | | **1) ದಸರೀಘಟ್ಟ** | | |
| 1 | 2 | ಚಿಕ್ಕಮ್ಮ ಕೋಂ ಡಿ.ಎಲ್. ಗೋವಿಂದೇಗೌಡ | 182/2 | 0–05 |
| 2 | 5 | ಲಕ್ಷ್ಮಮ್ಮ ಕೋಂ ರಂಗಶೆಟ್ಟಿ | 182/8 | 0–0 1/2 |
| 3 | 6 | ಚಿಕ್ಕಮ್ಮ ಕೋಂ ಡಿ.ಎಲ್. ಗೋವಿಂದೇಗೌಡ | 183/3 | 0–03 |
| 4 | 8 | ಬೋರಮ್ಮ ಕೋಂ ರಾಮೇಗೌಡ, ಶಿವಣ್ಣ, ರಾಜಣ್ಣ | 184/6ಬಿ | 0–0 1/2 |
| 5 | 10 | ಡಿ.ಆರ್. ರಂಗಪ್ಪ | 231 | 0–08 |
| | | **ಒಟ್ಟು** | | **0–17** |

ಜಿಲ್ಲಾಧಿಕಾರಿಗಳು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 146

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(ಎಸ್)(109)ಸಿ.ಆರ್.18/08–09, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

**ವಿಷಯ:** ಮೆ:ಅವಸರಳ ಟೆಕ್ನಾಲಜೀಸ್ ಲಿ., ನಂ.47, 36ನೇ ಮುಖ್ಯರಸ್ತೆ, ಬಿ.ಟಿ.ಎಂ.1ನೇ ಹಂತ, ಡಾಲರ್ ಸ್ಕೀಂ, ಬೆಂಗಳೂರು 68 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಕೆ.ಚೂಡಹಳ್ಳಿ ಗ್ರಾಮದ ಸ.ನಂ. 83 ರಲ್ಲಿ 0–03 ಗುಂಟೆ ಜಮೀನನ್ನು ವಾಣಿಜ್ಯ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರ ಸಂಖ್ಯೆ: ವಿಜಿಜಾದ (ಬೆಂ.ದ.ತಾ) ಸಿ.ಆರ್/10/07–08, ದಿನಾಂಕ: 16.2.2008.

ಮೆ:ಅವಸರಳ ಟೆಕ್ನಾಲಜೀಸ್ ಲಿ., ನಂ.47, 36ನೇ ಮುಖ್ಯರಸ್ತೆ, ಬಿ.ಟಿ.ಎಂ.1ನೇ ಹಂತ, ಡಾಲರ್ ಸ್ಕೀಂ, ಬೆಂಗಳೂರು 68 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಕೆ.ಚೂಡಹಳ್ಳಿ ಗ್ರಾಮದ ಸ.ನಂ. 83 ರಲ್ಲಿ 0–03 ಗುಂಟೆ ಜಮೀನನ್ನು ವಾಣಿಜ್ಯ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರದ ನಂ: ವಿಜಿಜಾದ(ಬೆಂ.ದ.ತಾ)ಸಿ.ಆರ್/10/07–08, ದಿನಾಂಕ: 16.2.2008 ರಲ್ಲಿ ಪ್ರಸ್ತಾವಿತ ಕೆ.ಚೂಡಹಳ್ಳಿ ಗ್ರಾಮದ ಸ.ನಂ. 83 ರಲ್ಲಿ 0–03 ಗುಂಟೆ ಜಮೀನನ್ನು ಹೊಂದಲು ಅವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರು ಪ್ರಸ್ತಾವಿತ ಜಮೀನನ್ನು ಸರ್ಕಾರಿ ಹರಾಜಿನಿಂದ ಪಡೆದಿರುತ್ತಾರೆ. ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (IV) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಕೆ.ಚೂಡಹಳ್ಳಿ ಗ್ರಾಮದ ಸ.ನಂ. 83 ರಲ್ಲಿ 0–03 ಗುಂಟೆ ಜಮೀನನ್ನು ಮೆ:ಅವಸರಳ ಟೆಕ್ನಾಲಜೀಸ್ ಲಿ., ನಂ.47, 36ನೇ ಮುಖ್ಯರಸ್ತೆ, ಬಿ.ಟಿ.ಎಂ.1ನೇ ಹಂತ, ಡಾಲರ್ ಸ್ಕೀಂ, ಬೆಂಗಳೂರು–68 ರವರಿಗೆ ವಾಣಿಜ್ಯ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (IV) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ಹಾಗೂ ಸರ್ಕಾರದ ಪತ್ರ ಆರ್.ಡಿ.6 ಎಲ್.ಆರ್.ಎಂ.2008, ದಿನಾಂಕ: 31.5.2008 ರ ನಿರ್ದೇಶನದಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಹೊಂದಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಾಣಿಜ್ಯ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 151

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ**

**ಸಾರ್ವಜನಿಕ ಪ್ರಕಟಣೆ**

**ನಮೂನೆ–27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

**ಸಂಖ್ಯೆ:ಎಲ್‌ಎನ್‌ಡಿ.ಸಿಆರ್:66:2008–09, ದಿನಾಂಕ: 9ನೇ ಮಾರ್ಚ್ 2009**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಹಳ್ಳ 0–18 ಕಟ್ಟೆ 0–29 ಕಾಲುದಾರಿ 0–03 ಗು. ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಹಳ್ಳ ಕಟ್ಟೆ, ಕಾಲುದಾರಿ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಹಳ್ಳ, ಕಟ್ಟೆ, ಕಾಲುದಾರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮಿಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮಿಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | |
|---|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | : | ಚಿನ್ನಪ್ಪನಹಳ್ಳಿ |
| ತಾಲ್ಲೂಕು | : | ಬೆಂಗಳೂರು ಪೂರ್ವ |
| ಜಿಲ್ಲೆ | : | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | : | ಸರ್ಕಾರಿ ಹಳ್ಳ 0–18 ಗು: ಕಟ್ಟೆ 0–29 ಗು. ಮತ್ತು ಕಾಲು ದಾರಿ 0–03 ಗುಂಟೆ |

| | | |
|---|---|---|
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | : | ಸರ್ಕಾರಿ ಹಳ್ಳ 0–18 ಗು. ಕಟ್ಟೆ 0–29 ಗು. ಮತ್ತು ಕಾಲು ದಾರಿ 0–03 ಗು. |
| ಮೇರೆ | : | ಪೂರ್ವ: ಸ.ನಂ.21:3 ರ ಉಳಿಕೆ ಜಮೀನು<br>ಪ: ಸ.ನಂ.21:3 ರ ಉಳಿಕೆ ಮತ್ತು 24ರ ಜಮೀನು ಉ:ಸ.ನಂ.21:3 ರ ಉಳಿಕೆ ಜಮೀನು ದ:ಸ.ನಂ.21:3ರ ಉಳಿಕೆ ಜಮೀನು |
| ಸಾರ್ವಜನಿಕ ರಸ್ತೆ : ಬೀದಿ :ಗಲ್ಲಿ : ದಾರಿ ಅಥವಾ ಅದರ ಭಾಗ. | : | ಸರ್ಕಾರಿ ಹಳ್ಳ 0–18 ಗು: ಕಟ್ಟೆ 0–29 ಗು ಮತ್ತು ಕಾಲು ದಾರಿ 0–03 ಗುಂಟೆ. |

ತಹಶೀಲ್ದಾರ್,

ಪಿ.ಆರ್. 155 ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

**ವಿಶೇಷ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿ**

**ವಿಷಯ:** ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಹೆಬ್ಬಗೋಡಿ ಗ್ರಾಮದ ಸರ್ವೆ ನಂ : 20ರಲ್ಲಿ 0–10 ಗುಂಟೆ ಸರ್ಕಾರಿ ಜಮೀನನ್ನು ಶ್ರೀ ಕೃಷ್ಣ ಧರ್ಮರಾಯಸ್ವಾಮಿ ದೇವಸ್ಥಾನಕ್ಕಾಗಿ ಕಾಯ್ದಿರಿಸಲು ಕೋರಿರುವ ಬಗ್ಗೆ.

**ಉಲ್ಲೇಖ:** ತಹಸೀಲ್ದಾರ್, ಆನೇಕಲ್ ತಾಲ್ಲೂಕು, ಆನೇಕಲ್‌ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ ಸಿಆರ್ 498/2008–09, ದಿನಾಂಕ: 4.3.2009

**ಪ್ರಸ್ತಾವನೆ:**

ಆನೇಕಲ್ ತಾಲ್ಲೂಕು, ಹೆಬ್ಬಗೋಡಿ ಗ್ರಾಮಸ್ಥರು, ಅತ್ತಿಬೆಲೆ ಹೋಬಳಿ, ಹೆಬ್ಬಗೋಡಿ ಗ್ರಾಮದ ಸರ್ವೆ ನಂ : 20ರಲ್ಲಿ 0–10 ಗುಂಟೆ ಜಮೀನನ್ನು ಶ್ರೀ ಕೃಷ್ಣ ಧರ್ಮರಾಯಸ್ವಾಮಿ ದೇವಸ್ಥಾನಕ್ಕಾಗಿ ಕಾಯ್ದಿರಿಸಲು ಕೋರಿದ್ದು ಈ ಬಗ್ಗೆ ತಹಸೀಲ್ದಾರ್, ಆನೇಕಲ್ ತಾಲ್ಲೂಕು, ಆನೇಕಲ್‌ರವರು ಉಲ್ಲೇಖದ ಪತ್ರದಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ತಹಸೀಲ್ದಾರ್‌ರವರ ವರದಿಯಂತೆ ಪ್ರಶ್ನಿತ ಹೆಬ್ಬಗೋಡಿ ಗ್ರಾಮದ ಸರ್ವೆ ನಂ : 20 ಆರ್.ಟಿ.ಸಿ.ಯಂತೆ ಸರ್ಕಾರಿ ಬಾವಿ ಎಂದು ನಮೂದಾಗಿದ್ದು ಒಟ್ಟು ವಿಸ್ತೀರ್ಣ 0–25 ಗುಂಟೆ ಇರುತ್ತದೆ. ಸದರಿ ಜಮೀನಿನಲ್ಲಿ ಶ್ರೀ ಓಂ ಶಕ್ತಿ ದೇವಸ್ಥಾನ ಮತ್ತು ಶ್ರೀ ಆಂಜನೇಯಸ್ವಾಮಿ ದೇವಸ್ಥಾನವಿದ್ದು ಉಳಿಕೆ 0–12 ಗುಂಟೆ ಖಿಲ್ಲಾ ಇರುವ ಜಮೀನಿನಲ್ಲಿ 0–10 ಗುಂಟೆ ವಿಸ್ತೀರ್ಣವು ಪಲ್ಲಕ್ಕಿ ಉತ್ಸವ ಮತ್ತು ಕರಗ ಮಹೋತ್ಸವದ ಪೂಜಾ ಕಾರ್ಯಗಳಿಗೆ ಅವಶ್ಯಕತೆಯಿರುವುದಾಗಿ ಸದರಿ ವಿಸ್ತೀರ್ಣವನ್ನು ಶ್ರೀ ಕೃಷ್ಣ ಧರ್ಮರಾಯಸ್ವಾಮಿ ದೇವಸ್ಥಾನಕ್ಕೆ ಕಾಯ್ದಿರಿಸಲು ತಹಸೀಲ್ದಾರ್‌ರವರು ವರದಿ ಸಲ್ಲಿಸಿರುತ್ತಾರೆ. ತಹಸೀಲ್ದಾರ್‌ರವರ ಪ್ರಸ್ತಾವನೆಯ ಮೇರೆಗೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ಎಲ್‌ಎನ್‌ಡಿ [ಎ] ಸಿಆರ್ 105/2008–09, ದಿನಾಂಕ: 16ನೇ ಮಾರ್ಚ್ 2009**

ತಹಸೀಲ್ದಾರ್‌ರವರ ವರದಿ ಮೇರೆಗೆ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಹೆಬ್ಬಗೋಡಿ ಗ್ರಾಮದ ಸರ್ವೆ ನಂ. 20ರಲ್ಲಿ 0–10 ಗುಂಟೆ ಸರ್ಕಾರಿ ಬಾವಿ ಜಮೀನನ್ನು [ಬಾವಿ ಜಾಗ ಕಾಯ್ದಿರಿಸಿ] ಶ್ರೀ ಕೃಷ್ಣಧರ್ಮರಾಯಸ್ವಾಮಿ ದೇವಸ್ಥಾನಕ್ಕಾಗಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರಡಿ ಕಾಯ್ದಿರಿಸಿ ಆದೇಶಿಸಿದೆ.

**ಷರತ್ತುಗಳು**

1. ಪ್ರಶ್ನಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಕಾಯ್ದಿರಿಸಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಈ ಜಮೀನಿನ ಹಕ್ಕು ಯಾವಾಗಲೂ ಸರ್ಕಾರಕ್ಕೆ ಸೇರಿರುತ್ತದೆ. ದೇವಸ್ಥಾನದ ಟ್ರಸ್ಟ್‌ಗೆ ಯಾವುದೇ ಹಕ್ಕು ಇರುವುದಿಲ್ಲ.
3. ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಸೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಸೀಲ್ದಾರ್, ಆನೇಕಲ್ ತಾಲ್ಲೂಕು, ಆನೇಕಲ್‌ರವರು ಮೇಲ್ಕಂಡ ಉದ್ದೇಶಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

**ಹೆಚ್. ರಾಮಾಂಜನೇಯ**

ಪಿ.ಆರ್. 156 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕಂದಾಯ ಸಚಿವಾಲಯ

### ಭೂಸ್ವಾಧೀನ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಘೋಷಣೆ

**ಕ್ರಮಾಂಕ: ಕಂಇ 14 ಭೂಸ್ವಾತು 2009, ದಿನಾಂಕ: 13ನೇ ಮಾರ್ಚ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1) ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್‌ಎಕ್ಯೂ ಎಸ್‌ಆರ್/30/07–08, ದಿನಾಂಕ: 19.10.2007ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894) (1) 5ಎ ಪ್ರಕರಣದ (2)ನೇ ಉಪಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕ್ಷೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ತುರುವೇಕೆರೆ **ಹೋಬಳಿ :** ಮಾಯಸಂದ್ರ **ಗ್ರಾಮ :** ಜಡೆಯ, ದಾಸಿಹಳ್ಳಿ, ಚಿಕ್ಕಬೀರನಕೆರೆ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| **1. ಗ್ರಾಮ: ಜಡೆಯ** | | | | | | | | | | |
| 1. | ಜವರಪ್ಪ ಬಿನ್ ಬೋರೇಗೌಡ, ಬಿ. ರಾಮಕೃಷ್ಣ ಬಿನ್ ಬಸಪ್ಪ, ಭೈರಪ್ಪ ಬಿನ್ ಬೋರೇಗೌಡ | ಜವರಪ್ಪ, ಬಿ. ರಾಮಕೃಷ್ಣ, ಭೈರಪ್ಪ | 63/1 | ಖುಷ್ಕಿ | 63/2ಎ | ನಾಲೆ | 63/1 | 63/1 | 0–01 | 0–03 |
| 2. | ಜವರಪ್ಪ ಬಿನ್ ಬೋರೇಗೌಡ, ಬಿ. ರಾಮಕೃಷ್ಣ ಬಿನ್ ಬಸಪ್ಪ, ಭೈರಪ್ಪ ಬಿನ್ ಬೋರೇಗೌಡ | ಜವರಪ್ಪ, ಬಿ. ರಾಮಕೃಷ್ಣ, ಭೈರಪ್ಪ | 63/2ಎ | ಖುಷ್ಕಿ | 63/2ಬಿ | 63/1 | 63/2ಎ | 63/2ಬಿ | 0–0 $^1/_2$ | 0–02 |
| 3. | ಕೆ. ಬಸವರಾಜು ಬಿನ್ ಕೃಷ್ಣಪ್ಪ, ಬೋರಲಿಂಗಯ್ಯ ಬಿನ್ ಬೈರೇಗೌಡ | ಕೆ. ಬಸವರಾಜು, ಬೋರಲಿಂಗಯ್ಯ | 63/2ಬಿ 1 | ಖುಷ್ಕಿ | 63/3 | 63/2ಎ | 63/2ಬಿ | 63/2ಬಿ | 0–0 $^1/_2$ | 0–02 |
| 4. | ಹೊಂಬಾಳಮ್ಮ ಕೋಂ ಬೋರಲಿಂಗಯ್ಯ | ಹೊಂಬಾಳಮ್ಮ | 63/3 | ಖುಷ್ಕಿ | 64 | 63/2ಬಿ | 63/3 | 63/3 | 0–01 $^1/_4$ | 0–03 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 5. | ಆರ್. ಜನಾರ್ಧನ ಬಿನ್ ರಾಮಣ್ಣ, ಸುಮಿತ್ರಮ್ಮ ಕೋಂ ಶ್ರೀನಿವಾಸಮೂರ್ತಿ, ಲಕ್ಷ್ಮಮ್ಮ ಕೋಂ ನಂಜುಂಡಯ್ಯ | ಆರ್. ಜನಾರ್ಧನ, ಸುಮಿತ್ರಮ್ಮ, ಲಕ್ಷ್ಮಮ್ಮ | 64 | ಖುಷ್ಕಿ | 65 | 63/3 | 64 | 64 | 0–02 $^{1}/_{2}$ | 0–08 |
| 6. | ಕೆಂಪಮ್ಮ ಕೋಂ ಮೂಡಲಗಿರಿ, ಎಂ.ರಾಮಣ್ಣ ಬಿನ್ ಮೂಡಲಗಿರಿ, ಕೆಂಪೇಗೌಡ | ಕೆಂಪಮ್ಮ, ರಾಮಣ್ಣ, ಕೆಂಪೇಗೌಡ | 65/2 | ಖುಷ್ಕಿ | 69/1 | 64 | 65 | 65 | 0–02 $^{1}/_{2}$ | 0–07 |
| 7. | ಈರಮಾಸ್ತಯ್ಯ ಬಿನ್ ಚಿಕ್ಕಯ್ಯ, ಕೆಂಪಯ್ಯ ಬಿನ್ ಚಿಕ್ಕಯ್ಯ | ಈರಮಾಸ್ತಯ್ಯ, ಕೆಂಪಯ್ಯ | 68 | ಖುಷ್ಕಿ | 30/1,2 | 68 | 68 | 69/2 | 0–02 | 0–06 |
| 8. | ಕೆ.ಮರೀಗೌಡ ಬಿನ್ ಕಪನೀಗೌಡ, ಬಿ.ರಾಮಕೃಷ್ಣ ಬಿನ್ ಬಸಪ್ಪ, ಕೆ.ಗಂಗಣ್ಣ ಬಿನ್ ಕೃಷ್ಣಪ್ಪ | ಕೆ.ಮರೀಗೌಡ, ಬಿ.ರಾಮಕೃಷ್ಣ, ಕೆ.ಗಂಗಣ್ಣ | 69/1 | ಖುಷ್ಕಿ | 69/2 | 65 | 69/1 | 69/1 | 0–02 | 0–05 |
| 9. | ನಿಂಗಮ್ಮ ಕೋಂ ಗಜ್ಜಾಮೇಸ್ತ್ರಿ | ನಿಂಗಮ್ಮ | 201 | ಖುಷ್ಕಿ | 201 | ನಾಲೆ | 204/4 | 201 | 0–02 | 0–06 |
| 10. | ಜಿ. ನಂಜುಂಡಯ್ಯ ಬಿನ್ ಗವಿಯಪ್ಪ, ಜಿ. ಸಿದ್ದಲಿಂಗಯ್ಯ, ಗಂಗಾಧರಯ್ಯ ಬಿನ್ ಗವಿಯಪ್ಪ, ಗಂಗಮ್ಮ ಕೋಂ ನಂಜುಂಡಯ್ಯ | | 204/4 | ಖುಷ್ಕಿ | 204 | 204/4 | 204/4 | 204/4 | 0–05 | 0–15 |
| 11. | ಶಿದ್ದೇಗೌಡ ಬಿನ್ ಶಿದ್ದಪ್ಪನ ಭೈರೇಗೌಡ, ಭೈರಪ್ಪ ಬಿನ್ ನಂಜೇಗೌಡ, ನಂಜುಂಡಯ್ಯ ಬಿನ್ ನಂಜೇಗೌಡ, ಗಂಗಾಧರಯ್ಯ ಬಿನ್ ನಂಜೇಗೌಡ, ಗಂಗಾಧರಯ್ಯ ಬಿನ್ ಗವಿಯಪ್ಪ, ಬಿ.ಗಂಗಾಧರಯ್ಯ ಬಿನ್ ಬೆಟ್ಟೇಗೌಡ | ಕೆ.ಬೋರಣ್ಣ, ಭೈರಪ್ಪ, ನಂಜುಂಡಯ್ಯ, ಗಂಗಾಧರಯ್ಯ, ಗಂಗಾಧರಯ್ಯ, ಗಂಗಾಧರಯ್ಯ, ಶಿದ್ದೇಗೌಡ | 205 | ಖುಷ್ಕಿ | 224 | 204/3 204/4 | 205 | 205 | 0–06 | 0–18 |
| 12. | ಪುಟ್ಟೇಗೌಡ ಬಿನ್ ನಂಜೇಗೌಡ, ಬೋರೇಗೌಡ ಬಿನ್ ಶಿವನಂಜೇಗೌಡ, ಬಿ.ಪ್ರಕಾಶ್ ಬಿನ್ ಬೋರೇಗೌಡ, ನಾಗರಾಜು ಬಿನ್ ಬೋರೇಗೌಡ, ಎನ್. ಶಿವಣ್ಣ ಬಿನ್ ನಂಜೇಗೌಡ, ಎನ್. ಪುಟ್ಟೇಗೌಡ ಬಿನ್ ನರಸಿಂಹಮೂರ್ತಿ | ಪುಟ್ಟೇಗೌಡ, ಬೋರೇಗೌಡ, ಎನ್. ಶಿವಣ್ಣ, ಎನ್. ಪ್ರಕಾಶ್, ನಾಗರಾಜು | 222/8 | ಖುಷ್ಕಿ | 222/13 | 222/8 | 222/8 | ಓಣಿ | 0–02 | 0–06 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 13. | ಶಿವನಂಜಯ್ಯ ಬಿನ್ ಭೈರಪ್ಪ, ಶಿದ್ದರಾಮಯ್ಯ ಬಿನ್ ಶಿದ್ದಯ್ಯ | ಶಿವನಂಜಯ್ಯ, ಶಿದ್ದರಾಮಯ್ಯ | 222/12 | ಖುಷ್ಕಿ | 223/4 | 222/13 | 222/12 | 222/12 | 0–01 | 0–03 |
| 14. | ಲಿಂಗೇಗೌಡ ಬಿನ್ ಲಿಂಗೇಗೌಡ, ಗಿರಿಯಪ್ಪ ಬಿನ್ ಲಿಂಗೇಗೌಡ, ಕೆಂಪಯ್ಯ ಬಿನ್ ರಾಮಣ್ಣ | ಲಿಂಗೇಗೌಡ, ಕೆಂಪಮ್ಮ, ಗಿರಿಯಪ್ಪ | 222/13 | ಖುಷ್ಕಿ | 222/12 | 222/8 | 222/13 | 222/13 | 0–02 | 0–06 |
| 15. | ನಂಜಪ್ಪ ಬಿನ್ ನಿಂಗಯ್ಯ | ನಂಜಪ್ಪ | 223/4 | ಖುಷ್ಕಿ | 223/5 | 222/12 | 223/4 | 223/4 | 0–0 $^{1}/_{2}$ | 0–02 |
| 16. | ಶಿದ್ದಯ್ಯ ಬಿನ್ ಕಾಶಯ್ಯ | ಶಿದ್ದಯ್ಯ, ಬೋರಯ್ಯ | 223/5 | ಖುಷ್ಕಿ | 223/6 | 223/4 | 223/5 | 223/5 | 0–0 $^{1}/_{2}$ | 0–02 |
| 17. | ಹುಚ್ಚಮ್ಮ ಕೋಂ ಲೇಟ್ ಸಿದ್ದಯ್ಯ | ಹುಚ್ಚಮ್ಮ | 223/6 | ಖುಷ್ಕಿ | 223/8 | 223/5 | 223/6 | 223/6 | 0–0 $^{1}/_{2}$ | 0–02 |
| 18. | ಕಾಶಿ ಬಿನ್ ಶಿದ್ದ | ಕಾಶಿ | 223/8 | ಖುಷ್ಕಿ | 223/10 | 223/6 | 223/8 | 223/8 | 0–0 $^{1}/_{2}$ | 0–02 |
| 19. | ಕೆಂಪೂರಯ್ಯ ಬಿನ್ ಹನುಮಂತಯ್ಯ, ಗಿರಿಯಪ್ಪ ಬಿನ್ ಲಿಂಗೇಗೌಡ | ಕೆಂಪರಾಮಯ್ಯ, ಗಿರಿಯಪ್ಪ | 223/10 | ಖುಷ್ಕಿ | 223/11 | 223/8 | 223/10 | 223/10 | 0–01 | 0–03 |
| 20. | ಮಾಯಣ್ಣ ಬಿನ್ ಕಪನಿಗೌಡ, ಬೆಟ್ಟೇಗೌಡ ಬಿನ್ ಕಪನೀಗೌಡ | ಚಿಕ್ಕಮ್ಮ | 223/11 | ಖುಷ್ಕಿ | 225/1 | 223/10 | 223/11 | 223/11 | 0–01 | 0–03 |
| 21. | ಭೈರೇಗೌಡ ಬಿನ್ ಲಿಂಗೇಗೌಡ, ನಂಜಪ್ಪ ಬಿನ್ ಲಿಂಗಳೇಗೌಡ, ಎಲ್.ರಂಗಯ್ಯ ಬಿನ್ ಲಿಂಗಳೇಗೌಡ | ಭೈರೇಗೌಡ, ನಂಜಪ್ಪ, ರಂಗಯ್ಯ | 224/1 | ಖುಷ್ಕಿ | 224 | 205 | 222/8 | 224 | 0–02 | 0–06 |
| 22. | ಜೆ.ವಿ.ರಾಮಣ್ಣ, ಜೆ.ವಿ.ನಂಜಪ್ಪ, ಜೆ.ವಿ.ಶಂಕರಪ್ಪ, ಜೆ.ವಿ.ರಂಗಪ್ಪ, ಜೆ.ವಿ.ಭೈರಪ್ಪ, ಜೆ.ವಿ.ನಂಜುಂಡಪ್ಪ | ಜೆ.ವಿ.ರಾಮಣ್ಣ, ಜೆ.ವಿ.ಶಂಕರಪ್ಪ, ಜೆ.ವಿ.ರಂಗಪ್ಪ, ಜೆ.ವಿ.ಭೈರಪ್ಪ, ಜೆ.ವಿ.ನಂಜುಂಡಪ್ಪ | 225/1 | ಖುಷ್ಕಿ | 225/2 | 223/11 | 225/1 | 225/1 | 0–01 | 0–03 |
| 23. | ನಂಜಪ್ಪ ಬಿನ್ ಶಿದ್ದೇಗೌಡ, ಎಸ್. ಬೋರೇಗೌಡ ಬಿನ್ ಶಿದ್ದೇಗೌಡ | ನಂಜಪ್ಪ, ಎಸ್. ಬೋರೇಗೌಡ | 225/2 | ಖುಷ್ಕಿ | 225/4 | 225/1 | 225/2 | 225/2 | 0–01 | 0–03 |
| 24. | ನರಸಪ್ಪ ಬಿನ್ ಯಾಲಕ್ಕಯ್ಯ | ನರಸಪ್ಪ | 225/4 | ಖುಷ್ಕಿ | 227/1 | 225/2 | 225/4 | 225/4 | 0–04 | 0–12 |
| 25. | ಜಿ.ಗಂಗಾಧರಯ್ಯ ಬಿನ್ ಗವಿಯಪ್ಪ | ಜಿ.ಗಂಗಾಧರಯ್ಯ | 227/5 | ಖುಷ್ಕಿ | 228/1 | 227/1 | 227/5 | 227/5 | 0–01 | 0–03 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ-ಗುಂ | ಆಕಾರ ರೂ-ಪೈ |
| 26. | ಜಿ.ಶಿದ್ದಲಿಂಗಯ್ಯ ಬಿನ್ ಲಿಂಗೇಗೌಡ, ಕೆಂಪಮ್ಮ ಕೋಂ ರಾಮಣ್ಣ, ಗಿರಿಯಪ್ಪ ಬಿನ್ ಲಿಂಗೇಗೌಡ, ತಿಮ್ಮಪ್ಪ ಬಿನ್ ಗಿರಿಯಪ್ಪ | ಜಿ.ಶಿದ್ದಲಿಂಗಯ್ಯ, ಕೆಂಪಮ್ಮ, ಗಿರಿಯಪ್ಪ, ತಿಮ್ಮಪ್ಪ | 228/1 | ಖುಷ್ಕಿ | 228/2 | 227/5 | 228/1 | 228/1 | 0–01 | 0–03 |
| 27. | ಬೋರೇಗೌಡ ಬಿನ್ ಲಿಂಗೇಗೌಡ, ಶಂಕರಪ್ಪ ಬಿನ್ ರಂಗಯ್ಯ, ಬೋರೇಗೌಡ ಬಿನ್ ರಂಗಯ್ಯ, ಭೈರಪ್ಪ ಬಿನ್ ರಂಗಯ್ಯ, ನಂಜರಾಜ್ ಬಿನ್ ಗಂಗಾಧರಯ್ಯ | ಬೋರೇಗೌಡ, ನಂಜರಾಜ್, ಬೋರೇಗೌಡ, ರಂಗಯ್ಯ, ಬೋರೇಗೌಡ, ಭೈರಪ್ಪ, ಶಂಕರಪ್ಪ, ರಂಗಯ್ಯ | 228/2 | ಖುಷ್ಕಿ | 229 | 228/1 | 228/2 | 228/2 | 0–01 | 0–03 |
| 28. | ಮರಿಲಿಂಗಾಚಾರ್ ಬಿನ್ ಬಸಪ್ಪ, ಚನ್ನಬಸವಾಚಾರ್ | ಮರಿಲಿಂಗಾಚಾರ್ | 229 | ಖುಷ್ಕಿ | 230/3 | 228/2 | 229 | 229 | 0–01 $^{1}/_{2}$ | 0–03 |
| 29. | ಶಂಕರ ಬಿನ್ ರಂಗಯ್ಯ, ಗಂಗಾಧರಯ್ಯ ಬಿನ್ ನಂಜೇಗೌಡ, ಬೋರೇಗೌಡ, ರಂಗಯ್ಯ, ಭೈರಪ್ಪ ಬಿನ್ ರಂಗಯ್ಯ, ರಾಮಕೃಷ್ಣ ಬಿನ್ ರಂಗಯ್ಯ | ಗಂಗಾಧರಯ್ಯ, ಬೋರೇಗೌಡ, ಭೈರಪ್ಪ, ರಾಮಕೃಷ್ಣ, ಶಂಕರ | 230/3 | ಖುಷ್ಕಿ | 230/4 | 229 | 230/3 | 230/3 | 0–02 $^{1}/_{2}$ | 0–05 |
| 30. | ಬೆಟ್ಟೇಗೌಡ ಬಿನ್ ಕಪನೀಗೌಡ, ಗಂಗಯ್ಯ ಬಿನ್ ಬೆಟ್ಟೇಗೌಡ, ಗಂಗಯ್ಯ ಬಿನ್ ಬೆಟ್ಟೇಗೌಡ, ನಂಜಪ್ಪ ಬಿನ್ ಗವಿಯಪ್ಪ | ಗಂಗಯ್ಯ, ನಂಜಪ್ಪ, ಬೆಟ್ಟೇಗೌಡ, ಬೈರಪ್ಪ, ರಾಮಕೃಷ್ಣ | 230/4 | ಖುಷ್ಕಿ | 230/4 | 230/3 | 230/4 | 230/4 | 0–01 | 0–03 |
| | **ಒಟ್ಟು** | | | | | | | | **1–10 $^{1}/_{4}$** | |
| | **2. ಗ್ರಾಮ : ದಾಸಿಹಳ್ಳಿ** | | | | | | | | | |
| 31. | ಮಾಯಣ್ಣ ಬಿನ್ ಹುಚ್ಚೇಗೌಡ, ಗಿರಿಯಪ್ಪ ಬಿನ್ ನಿಂಗೇಗೌಡ, ಕೆಂಪಮ್ಮ ಕೋಂ ರಾಮಣ್ಣ | ಮಾಯಣ್ಣ, ಗಿರಿಯಪ್ಪ, ಕೆಂಪಮ್ಮ, ಚಿಕ್ಕೇಗೌಡ | 30/1 | ಖುಷ್ಕಿ | ಕೆರೆ | ಗಡಿ, 68 | 30/1 | 30/2 | 0–13 | 0–39 |
| 32. | ನರಸಮ್ಮ, ಮಾಯಣ್ಣ, ಲಿಂಗೇಗೌಡ | ಲಿಂಗೇಗೌಡ, ಮಾಯಣ್ಣಗೌಡ, ಚಿಕ್ಕೇಗೌಡ | 30/2 | ಖುಷ್ಕಿ | ಕೆರೆ | 68 | 30/1 | 30/2 | 0–05 | 0–18 |
| | **ಒಟ್ಟು** | | | | | | | | **0–18** | |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| **3. ಗ್ರಾಮ : ಚಿಕ್ಕಬೀರನಕೆರೆ** | | | | | | | | | | |
| 33. | ಕಾಳಮ್ಮ ಕೋಂ ಸಿದ್ದಪ್ಪ | ಸಿದ್ದಯ್ಯ, ಕಾಳಮ್ಮ | 37/1 | ಖುಷ್ಕಿ | 37/1 | 37/1 | 51 | 37/2ಎ | 0–02 | 0–06 |
| 34. | ಸಿದ್ದಯ್ಯ ಬಿನ್ ಪೂಜಾರ ನಿಂಗಯ್ಯ | ಸಿದ್ದಯ್ಯ | 37/2ಎ | ಖುಷ್ಕಿ | 37/2ಎ | 37/2ಎ | 37/1 | 37/3 | 0–01 | 0–03 |
| 35. | ತಿಮ್ಮೇಗೌಡ ಬಿನ್ ಗೋವಿಂದೇಗೌಡ, ಎಂ.ಜಿ. ಶ್ರೀನಿವಾಸಮೂರ್ತಿ ಬಿನ್ ಗಿರಿಯಪ್ಪಗೌಡ, ಎಂ.ಜಿ.ಸೋಮಸುಂದರ್ ಬಿನ್ ಗಿರಿಯಪ್ಪಗೌಡ | ತಿಮ್ಮೇಗೌಡ, ಎಂ.ಜಿ. ಶ್ರೀನಿವಾಸಮೂರ್ತಿ, ಎಂ.ಜಿ. ಸೋಮಸುಂದರ್ | 37/2ಬಿ | ಖುಷ್ಕಿ | 37/2ಎ | 37/2ಬಿ | 37/2ಬಿ | 37/3 | 0–01 | 0–03 |
| 36. | ತಿಮ್ಮೇಗೌಡ ಬಿನ್ ಗೋವಿಂದೇಗೌಡ, ಎಂ.ಜಿ. ಶ್ರೀನಿವಾಸಮೂರ್ತಿ ಬಿನ್ ಗಿರಿಯಪ್ಪಗೌಡ, ಎಂ.ಜಿ.ಸೋಮಸುಂದರ್ ಬಿನ್ ಗಿರಿಯಪ್ಪಗೌಡ | ತಿಮ್ಮೇಗೌಡ, ಎಂ.ಜಿ. ಶ್ರೀನಿವಾಸಮೂರ್ತಿ, ಎಂ.ಜಿ. ಸೋಮಸುಂದರ್ | 37/3 | ಖುಷ್ಕಿ | 37/3 | 37/3 | 37/2ಬಿ | 37/4 | 0–02 | 0–06 |
| 37. | ನಂಜಪ್ಪ ಬಿನ್ ಜವರೇಗೌಡ, ಬಸವರಾಜು ಬಿನ್ ಜವರೇಗೌಡ, ಗೋವಿಂದೇಗೌಡ ಬಿನ್ ಜವರೇಗೌಡ, ರಾಮಣ್ಣ ಬಿನ್ ಜವರಯ್ಯ | ನಂಜಪ್ಪ, ರಾಮಣ್ಣ, ಬಸವರಾಜು, ಗೋವಿಂದೇಗೌಡ | 37/4 | ಖುಷ್ಕಿ | 37/4 | 37/4 | 37/3 | 38 | 0–02 | 0–06 |
| 38. | ಗಿರಿಯಪ್ಪಗೌಡ ಬಿನ್ ಗೋವಿಂದೇಗೌಡ, ತಿಮ್ಮೇಗೌಡ ಬಿನ್ ಗೋವಿಂದೇಗೌಡ | ಗಿರಿಯಪ್ಪಗೌಡ, ತಿಮ್ಮೇಗೌಡ | 38 | ಖುಷ್ಕಿ | 38 | 38 | 37/4 | 39/2 | 0–05 | 0–17 |
| 39. | ಕಾಳಮ್ಮ ಕೋಂ ಸಿದ್ದಯ್ಯ | ಕಾಳಮ್ಮ | 39/1 | ಖುಷ್ಕಿ | 39/2 | 39/1 | 39/1 | 40/1 | 0–10 | 0–30 |
| 40. | ಕೃಷ್ಣಪ್ಪ ಬಿನ್ ತಿಮ್ಮಯ್ಯ ಉ:ಕರಿಯಣ್ಣ | ಕೃಷ್ಣಪ್ಪ | 39/2 | ಖುಷ್ಕಿ | 39/2 | 39/1 | 38 | 39/2 | 0–02 | 0–06 |
| 41. | ನರಸಿಂಹಯ್ಯ ಬಿನ್ ಲಕ್ಕಯ್ಯ, ನರಸಯ್ಯ ಬಿನ್ ಹುಚ್ಚಯ್ಯ, ಲಕ್ಕಯ್ಯ ಬಿನ್ ಹುಚ್ಚಯ್ಯ | ನರಸಯ್ಯ, ಲಕ್ಕಯ್ಯ | 40/1 | ಖುಷ್ಕಿ | 40/1 | 41 | 41/1 | 40/1 | 0–04 | 0–12 |
| 42. | ಲಿಂಗ ಬಿನ್ ಬೋರ, ಸಿದ್ದಯ್ಯ ಬಿನ್ ಪೂ.ಲಿಂಗೇಗೌಡ, ಪೂ.ಬೋರೇಗೌಡ ಬಿನ್ ಗಂಗಯ್ಯ, ಶಿವಣ್ಣ ಬಿನ್ ಚುಂಚಯ್ಯ, ಸಿ.ನಾಗರಾಜು ಬಿನ್ ಎಂ.ನಂಜುಂಡಯ್ಯ, ಸಿ.ಎನ್. ಶಿವಣ್ಣಗೌಡ ಬಿನ್ ನಂಜುಂಡಯ್ಯ | ಸಿದ್ದಯ್ಯ, ಪೂ.ಬೋರೇಗೌಡ, ಶಿವಣ್ಣ, ಸಿ.ನಾಗರಾಜು, ಸಿ.ಎನ್. ಶಿವಣ್ಣಗೌಡ | 45/3 | ಖುಷ್ಕಿ ವ. ಭಾಗಾಯ್ತು | 47/13 | 45 | ಹಳ್ಳ | 48/5 | 0–0 $^{1}/_{2}$<br>0–01 $^{1}/_{2}$ | 0–01<br>0–05 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 43. | ಹುಚ್ಚಮ್ಮ ಕೋಂ ಗಂಗಯ್ಯ, ಲಕ್ಕಮ್ಮ ಕೋಂ ನಿಂಗಪ್ಪ | ಹುಚ್ಚಮ್ಮ, ಲಕ್ಕಮ್ಮ, ಚುಂಚಯ್ಯ | 47/1 | ಖುಷ್ಕಿ | 47/1 | 45 | ಹಳ್ಳ | 47/3 | 0–01 | 0–07 |
| 44. | ಅಲಮೇಲಮ್ಮ ಕೋಂ ರಾಜಣ್ಣ | ಅಲಮೇಲಮ್ಮ | 47/3 | ಖುಷ್ಕಿ | 47/3 | 45 | 47/1 | 47/4 | 0–01 | 0–07 |
| 45. | ಮಾಯಣ್ಣ ಜೆಡಿಯಾ | ಮಾಯಣ್ಣ | 47/4 | ಖುಷ್ಕಿ | 47/4 | 48/5 | 47/3 | 47/4 | 0–02 | 0–06 |
| 46. | ಚುಂಚಯ್ಯ ಬಿನ್ ಬೈರೇಗೌಡ | ಚುಂಚಯ್ಯ | 48/1 | ಖುಷ್ಕಿ | 48/2 | 48/10 | 48/1 | 48/1 | 0–02 | 0–06 |
| 47. | ಶಿವಣ್ಣ ಬಿನ್ ಚುಂಚಯ್ಯ | ಶಿವಣ್ಣ | 48/2 | ಖುಷ್ಕಿ | 48/4 | 48/1 | 48/2 | 48/2 | 0–02 | 0–06 |
| 48. | ಲಿಂಗಮ್ಮ ಕೋಂ ಬೋರೇಗೌಡ | ಬೋರಣ್ಣ | 48/3 | ಖುಷ್ಕಿ | 48/5 | 48/4 | 48/3 | 48/3 | 0–01 | 0–03 |
| 49. | ನಂಜಪ್ಪ ಬಿನ್ ಬೈರಪ್ಪ, ಗಂಗಪ್ಪ ಬಿನ್ ಬೈರಪ್ಪ, ಪೂ.ಬೋರೇಗೌಡ ಬಿನ್ ಗಂಗಯ್ಯ | ನಂಜಪ್ಪ, ಬಿ.ಗಂಗಪ್ಪ, ಪೂ.ಬೋರೇಗೌಡ | 48/4 | ಖುಷ್ಕಿ | 48/3 | 48/2 | 48/4 | 48/4 | 0–01 | 0–03 |
| 50. | ಪೂ.ಬೋರೇಗೌಡ ಬಿನ್ ಗಂಗಯ್ಯ | ಪೂ.ಬೋರೇಗೌಡ | 48/5 | ಖುಷ್ಕಿ | 47/4 | 48/5 | 45 | 48/5 | 0–04 | 0–12 |
| 51. | ಪೂ.ಬೋರೇಗೌಡ ಬಿನ್ ಗಂಗಯ್ಯ | ಪೂ.ಬೋರೇಗೌಡ | 48/7 | ಖುಷ್ಕಿ | 48/9 | 48/7 | 48/7 | 50/1 | 0–01 | 0–03 |
| 52. | ನಿಂಗಮ್ಮ ಕೋಂ ಬೋರಯ್ಯ | ನಿಂಗಮ್ಮ | 48/9 | ಖುಷ್ಕಿ | 48/10 | 48/7 | 48/9 | 48/9 | 0–01 | 0–03 |
| 53. | ಪೂ.ಬೋರೇಗೌಡ ಬಿನ್ ಗಂಗಯ್ಯ, ಶಿವಣ್ಣ ಬಿನ್ ಚುಂಚಯ್ಯ | ಪೂ.ಬೋರೇಗೌಡ, ಶಿವಣ್ಣ | 48/10 | ಖುಷ್ಕಿ | 48/1 | 48/9 | 48/10 | 48/10 | 0–02 | 0–06 |
| 54. | ಹುಚ್ಚಮ್ಮ ಕೋಂ ಗಂಗಯ್ಯ, ಲಕ್ಕಮ್ಮ ಕೋಂ ನಿಂಗಪ್ಪ | ಹುಚ್ಚಮ್ಮ, ಲಕ್ಕಮ್ಮ | 50/1 | ಖುಷ್ಕಿ | 50/1 | 50/1 | 48/7 | 50/2 | 0–02 | 0–07 |
| 55. | ಬೆಟ್ಟದಯ್ಯ, ಚನ್ನಮ್ಮ | ಬೆಟ್ಟದಯ್ಯ, ಚನ್ನಮ್ಮ | 50/2 | ಖುಷ್ಕಿ | 50/2 | 50/2 | 50/1 | 51 | 0–02 | 0–07 |
| 56. | ದಾಸಪ್ಪ ಬಿನ್ ಲಕ್ಕಯ್ಯ, ನರಸಯ್ಯ ಬಿನ್ ನರಸಯ್ಯ, ಮಾಯಮ್ಮ ಕೋಂ ನರಸಿಂಹಯ್ಯ, ನರಸಿಂಹಯ್ಯ ಬಿನ್ ನರಸಯ್ಯ, ತಿಮ್ಮಮ್ಮ ಕೋಂ ನರಸಿಂಹಯ್ಯ, ನರಸಯ್ಯ ಬಿನ್ ಹುಚ್ಚಯ್ಯ, ರಾಮಕೃಷ್ಣಪ್ಪ ಬಿನ್ ಹುಚ್ಚಯ್ಯ, ಲಕ್ಕಯ್ಯ ಬಿನ್ ಹುಚ್ಚಯ್ಯ, ರಾಮಕೃಷ್ಣಯ್ಯ ಬಿನ್ ಹುಚ್ಚಯ್ಯ | ದಾಸಪ್ಪ , ನರಸಯ್ಯ, ನರಸಯ್ಯ, ಮಾಯಮ್ಮ, ನರಸಿಂಹಯ್ಯ, ತಿಮ್ಮಮ್ಮ, ನರಸಯ್ಯ, ರಾಮಕೃಷ್ಣಪ್ಪ, ಲಕ್ಕಯ್ಯ, ರಾಮಕೃಷ್ಣಯ್ಯ | 51 | ಖುಷ್ಕಿ | 51 | 51 | 50/2 | 37/1 | 0–04 | 0–15 |
| | **ಒಟ್ಟು** | | | | | | | | **1–17** | |

**ಘೋಷ್ವಾರೆ**

| ಕ್ರ. ಸಂ. | ಗ್ರಾಮಗಳ ಹೆಸರು | ಖುಷ್ಕಿ | ವ.ಭಾಗಾಯ್ತು | ಖುಷ್ಕಿ |
|---|---|---|---|---|
| 1 | ಜಡೆಯ | 1–10 1/4 | – | 1–10 1/4 |
| 2 | ದಾಸಿಹಳ್ಳಿ | 0–18 | – | 0–18 |
| 3 | ಚಿಕ್ಕಬೀರನಕೆರೆ | 1–15 1/2 | 0–01 1/2 | 1–17 |
| | **ಒಟ್ಟು** | **3–03 3/4** | **0–01 1/2** | **3–05 1/4** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 145

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಕಾಯ್ದೆ ಕಲಂ. 6(1) ರ ಅನ್ವಯ ಘೋಷಣೆ**

**ಕ್ರಮಾಂಕ: ಕಂಇ.44 ಭೂಸ್ವಾಚ 2008, ದಿನಾಂಕ: 28ನೇ ಫೆಬ್ರವರಿ 2009**

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಬೆಂಗಳೂರು ಕರ್ನಾಟಕ ಗೃಹ ಮಂಡಳಿಯವರು ವಿವಿಧ ವರ್ಗದ ಮನೆಗಳನ್ನು ಕಟ್ಟಲು ಬೇಕಾಗಬಹುದೆಂದು ಗೃಹ ಮಂಡಳಿಯ ಆಯುಕ್ತರವರ ಕ್ರಮಾಂಕ: ಭೂಸ್ವಾವಿ.8/2005–06 ದಿನಾಂಕ: 23.5.2007ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದವರು 1991ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಕೇಂದ್ರ ಅಧಿನಿಯಮ (1) 5ಎ ಪ್ರಕರಣದ ಉಪಪ್ರಕರಣ (2) ಮತ್ತು 6(1ಎ) ಪ್ರಕರಣದ ಮೇರೆಗೆ ಗೃಹ ಆಯುಕ್ತರ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ಹೇಳಿದ ಉದ್ದೇಶಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಿದ್ದಾರೆ. ಸದರಿ ಭೂಸ್ವಾಧೀನ ಅಧಿನಿಯಮ 6ನೇ ಪ್ರಕರಣದ ಮೇರೆಗೆ ಸದರಿ ಜಮೀನು ಮೇಲಿನ ಉದ್ದೇಶಕ್ಕಾಗಿ ಬೇಕಾಗಿರುವುದೆಂದು ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂಸ್ವಾಧೀನ ಅಧಿನಿಯಮ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರನ್ನು ಸದರಿ ಜಮೀನಿನ ಸಂಬಂಧದಲ್ಲಿ ಮುಂದಿನ ಎಲ್ಲಾ ನಡವಳಿಕೆಗಳನ್ನು ಕೈಗೊಳ್ಳಲು ಗೃಹ ಆಯುಕ್ತರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸುವಂತೆ ಈ ಮೂಲಕ ನಿಯಮಿಸಲಾಗಿದೆ ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಚಿತ್ರದುರ್ಗ **ತಾಲ್ಲೂಕು:** ಹಿರಿಯೂರು **ಹೋಬಳಿ:** ಐಮಂಗಲ **ಗ್ರಾಮ:** ಯರದಕಟ್ಟೆ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗು | ಆಕಾರ |
|---|---|---|---|---|---|---|---|---|---|---|
| 1. | ರಂಗಪ್ಪ ಬಿನ್ ಮುಕಡಿ ಕರಿಯಪ್ಪ | ಎಂ.ಆರ್. ಮಂಜುನಾಥ ಬಿನ್ ರಂಗಪ್ಪ, ಕೃಷ್ಣಮೂರ್ತಿ ಬಿನ್ ಕರಿಯಪ್ಪ, ಬಿ. ಕೃಷ್ಣಪ್ಪ ಬಿನ್ ಬಾಲಪ್ಪ ಮಲ್ಲಪ್ಪ ಬಿನ್ ರಂಗಪ್ಪ, ಸಿ.ಕರಿಯಪ್ಪ ಬಿನ್ ಚಿತ್ತಪ್ಪ | 27/1ಎ | ಕೆಂಪು | ರಾಷ್ಟ್ರೀಯ ಹೆದ್ದಾರಿ | 31 | 27/1ಬಿ, 27/1ಎ1ಎ ಉಳಿಕೆ | 27/29 2ಎ ಎಂಬಿ 2 ಸಿ | 7–05 0–11 ಖ | 2–47 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ–ಗು | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 2. | ಮಹಾಲಿಂಗಪ್ಪ ಬಿನ್ ದೊಡ್ಡದಾಸಪ್ಪ | ಮಹಾಲಿಂಗಪ್ಪ ಬಿನ್ ದೊಡ್ಡದಾಸಪ್ಪ | 27/2ಎ | ಕೆಂಪು | 27/1ಬಿ | 31 | 27/1ಎ1ಎ | 26 | 6–09<br>0–07ಖ | 1–62 |
| 3. | ಈರಪ್ಪ ಬಿನ್ ಈರಪ್ಪ | ಈರಪ್ಪ ಬಿನ್ ಈರಪ್ಪ | 27/2ಬಿ | ಕೆಂಪು | 27/2ಸಿ,<br>27/2ಡಿ | 27/2ಎ | 27/1 | 26 | 4–13<br>0–05 ಖ | 1–13 |
| | | | | | | | | | 17–27<br>0–23 ಖ | |

**ಘೋಷ್ವಾರೆ**

| ತರಹೆ | ಐನು ಎ–ಗುಂ | ಖರಾಬು ಎ–ಗುಂ | ಒಟ್ಟು ಎ–ಗುಂ |
|---|---|---|---|
| ಖುಷ್ಕಿ | 17–27 | 0–23 | 18–10 |
| ತರಿ | – | – | – |
| ಭಾಗಾಯ್ತು | – | – | – |
| **ಒಟ್ಟು** | **17–27** | **0–23** | **18–10** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 147

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಕಾಯ್ದೆ ಕಲಂ. 6(1) ರ ಅನ್ವಯ ಘೋಷಣೆ**

**ಕ್ರಮಾಂಕ: ಕಂಇ. 25 ಭೂಸ್ವಾಶಿ 2009, ದಿನಾಂಕ: 9ನೇ ಮಾರ್ಚ್ 2009**

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಬೆಂಗಳೂರು ಕರ್ನಾಟಕ ಗೃಹ ಮಂಡಳಿಯವರು ಒಳ ಚರಂಡಿಯ ವ್ಯವಸ್ಥೆಗೆ ಬೇಕಾಗಬಹುದೆಂದು ಗೃಹ ಮಂಡಳಿಯ ಆಯುಕ್ತರವರ ಕ್ರಮಾಂಕ: ಕಗೃಮಂ/ಭೂಸ್ವಾವಿ.04/2007–08 ದಿನಾಂಕ: 31.5.2007ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದವರು 1991ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಕೇಂದ್ರ ಅಧಿನಿಯಮ (1) 5ಎ ಪ್ರಕರಣದ ಉಪಪ್ರಕರಣ (2) ಮತ್ತು 6(1ಎ) ಪ್ರಕರಣದ ಮೇರೆಗೆ ಗೃಹ ಆಯುಕ್ತರ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ಹೇಳಿದ ಉದ್ದೇಶಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಿದ್ದಾರೆ. ಸದರಿ ಭೂಸ್ವಾಧೀನ ಅಧಿನಿಯಮ 6ನೇ ಪ್ರಕರಣದ ಮೇರೆಗೆ ಸದರಿ ಜಮೀನು ಮೇಲಿನ ಉದ್ದೇಶಕ್ಕಾಗಿ ಬೇಕಾಗಿರುವುದೆಂದು ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂಸ್ವಾಧೀನ ಅಧಿನಿಯಮ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರನ್ನು ಸದರಿ ಜಮೀನಿನ ಸಂಬಂಧದಲ್ಲಿ ಮುಂದಿನ ಎಲ್ಲಾ ನಡವಳಿಕೆಗಳನ್ನು ಕೈಗೊಳ್ಳಲು ಗೃಹ ಆಯುಕ್ತರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸುವಂತೆ ಈ ಮೂಲಕ ನಿಯಮಿಸಲಾಗಿದೆ ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಶಿವಮೊಗ್ಗ **ತಾಲ್ಲೂಕು:** ಶಿಕಾರಿಪುರ **ಹೋಬಳಿ:** ಕಸಬಾ **ಗ್ರಾಮ:** ಗಬ್ಬೂರು

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ–ಗು | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1. | ಶಿವಮೂರ್ತಿಪ್ಪ ಬಿನ್ ಮನ್ಮಥಪ್ಪ | ಶಿವಮೂರ್ತಿ | 110/2 | ತರಿ | ಚನ್ನಹಳ್ಳಿ ಗಡಿ | 110/1 | 108<br>107 | 116 | 2–08 | 11–00 |
| 2. | ಉಮಾಪತಿ ಬಿನ್ ಈಶ್ವರಪ್ಪ | ಉಮಾಪತಿ | 110/3 | ತರಿ | ಚನ್ನಹಳ್ಳಿ ಗಡಿ | 110/1 | 108<br>107 | 110/2 | 2–01 | 10–00 |
| 3. | ಹುಚ್ರಾಯಪ್ಪ ಬಿನ್ ಬಸವಣ್ಣಪ್ಪ | ಹುಚ್ರಾಯಪ್ಪ | 116/1 | ತರಿ | 116/3 | 111<br>112<br>113 | 110 | 110/3 | 4–00 | 29–00 |
| 4. | ಎಸ್.ಹೆಚ್. ಮಂಜುನಾಥ ಬಿನ್ ಎಸ್. ಹಾಲಪ್ಪ | ಎಸ್.ಹೆಚ್. ಮಂಜುನಾಥ | 116/3 | ತರಿ | 117 | 114<br>115 | 116/3 | ರಸ್ತೆ | 1–31 | 3–00 |
| 5. | ಜಿ. ಕುಬೇಂದ್ರ ಬಿನ್ ದತ್ತು ತಂದೆ ಮಾಯಪ್ಪ | ಜಿ. ಕುಬೇಂದ್ರ | 1/1 | ಖುಷ್ಕಿ | 1 ರ ಉಳಿಕೆ | 1 ರ ಉಳಿಕೆ | 1 ರ ಉಳಿಕೆ | 1ರ ಉಳಿಕೆ | 0–02 | 0–60 |
| | **ಒಟ್ಟು ವಿಸ್ತೀರ್ಣ** | | | | | | | | **10–02** | |

**ಘೋಷ್ವಾರೆ**

| ಗ್ರಾಮ | ವಿಸ್ತೀರ್ಣ | | | ಒಟ್ಟು ವಿಸ್ತೀರ್ಣ |
|---|---|---|---|---|
| | ಖುಷ್ಕಿ | ತರಿ | ಖರಾಬು | |
| ಗಬ್ಬೂರು | 0–02 | 10–00 | – | 10–02 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 148

## ಕಂದಾಯ ಸಚಿವಾಲಯ

**ಭೂ ಆರ್ಜನೆ 6(1)ನೇ ಅಧಿನಿಯಮದ ಪ್ರಕರಣದ ಮೇರೆಗಿನ ಘೋಷಣೆ ಕ್ರಮಾಂಕ: ಕಂ.ಇ. 02 ಭೂ ಸ್ವಾ ಕೋ 2009, ದಿನಾಂಕ: 11ನೇ ಮಾರ್ಚ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿ ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಕೋಲಾರ ಜಿಲ್ಲೆ ಕೋಲಾರ ತಾಲ್ಲೂಕು ಕಸಬಾ ಹೋಬಳಿ, ಚಿನ್ನಾಪುರ ಗ್ರಾಮದ ಸ.ನಂ.17/2 ಮತ್ತು 19/1 ರಲ್ಲಿ ಒಟ್ಟು 0–17 ಗುಂಟೆ ಜಮೀನನ್ನು ರಸ್ತೆ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಳ್ಳುವ ಸಲುವಾಗಿ ನಮೂದಿಸಲಾದ ವಿಸ್ತೀರ್ಣದ ಜಮೀನುಗಳು ಅಗತ್ಯವಾಗಿದ್ದವು ಎಂದು ಕೋಲಾರ ಜಿಲ್ಲೆ, ಜಿಲ್ಲಾಧಿಕಾರಿಯವರ ಕ್ರಮಾಂಕ: ಎಲ್‌ಎಕ್ಯೂ.ಎಸ್‌ಆರ್ 22/2006–07, ದಿ: 18.12.2006ರ ಕ್ರಮ ಸಂಖ್ಯೆಯ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ;

ಕರ್ನಾಟಕ ಸರ್ಕಾರದವರು 1961ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ: 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ (1894ನೇ ಸಾಲಿನ ಕೇಂದ್ರದ ಅಧಿನಿಯಮ–1) 5ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1–a) ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯು ಪರಿಶೀಲಿಸಿದ ನಂತರ ಸದರಿ ಜಮೀನುಗಳನ್ನು ಮೇಲೆ ಹೇಳಿದ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಿದ್ದಾರೆ.

ಈ ಸದರಿ ಭೂ ಸಂಗ್ರಹಣಾ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳ ಮೇಲಿನ ಉದ್ದೇಶಕ್ಕಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು, ಕೋಲಾರ ಇವರನ್ನು ಸದರಿ ಭೂಮಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹರಣಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಸಹಾಯಕ ಕಮೀಷನರ್, ಕೋಲಾರ ಉಪವಿಭಾಗ, ಕೋಲಾರ ರವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಕೋಲಾರ **ತಾಲ್ಲೂಕು:** ಕೋಲಾರ **ಹೋಬಳಿ:** ಕಸಬಾ **ಗ್ರಾಮ:** ಚಿನ್ನಾಪುರ

| ಕ್ರ. ಸಂ. | ಖಾತೆದಾರರ /ಅನುಭವದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಗಳ ಹೆಸರು | ಸ.ನಂ. | ತರಹೆ | ಅಗತ್ಯವಿರುವ ಪ್ರದೇಶ ಮತ್ತು ವಿಸ್ತೀರ್ಣ ಎ. ಗುಂ. | ಮೌಲ್ಯ ನಿರ್ಧರಣೆ ರೂ. ಪೈ. |
|---|---|---|---|---|---|
| 1 | ವೆಂಕಟಸ್ವಾಮಿ ಬಿನ್ ಚೌಡಪ್ಪ | 17/2 | ಖುಷ್ಕಿ | 0–13<br>0–01 ಬಿ.ಖರಾಬ್<br>0–14 | 0–70 |
| 2 | ವೆಂಕಟಸ್ವಾಮಿ ಬಿನ್ ಚೌಡಪ್ಪ | 19/1 | ಖುಷ್ಕಿ | 0–03 | 0–15 |
| | **ಒಟ್ಟು** | | | **0–17** | |

**(ಒಟ್ಟು ವಿಸ್ತೀರ್ಣ ಹದಿನೇಳು ಗುಂಟೆ ಮಾತ್ರ)**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 153

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

## ಕಂದಾಯ ಸಚಿವಾಲಯ

**ಭೂಸ್ವಾಧೀನ ಕಾಯಿದೆ 6(1) ರ ಅನ್ವಯ ಘೋಷಣೆ ಕ್ರಮಾಂಕ: ಕಂಇ 133 ಭೂಸ್ವಾಬೆ 2008, ದಿನಾಂಕ: 25ನೇ ಮಾರ್ಚ್ 2009**

ಈ ಮುಂದಿನ ಅನುಸೂಚಿಯಲ್ಲಿರುವ ಜಮೀನು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಜಮೀನನ್ನು, ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಮಹಾಂತಲಿಂಗಪುರ ಗ್ರಾಮದ ಸರ್ವೆ ನಂಬರುಗಳಲ್ಲಿ ಒಟ್ಟು 1–03 ಗುಂಟೆ ಜಮೀನ್ನು ಬೈಪಾಸ್ ರಸ್ತೆಗಾಗಿ ಬೇಕಾಗಬಹುದೆಂದು ಲೋಕೋಪಯೋಗಿ ಇಲಾಖೆಯ ಪರವಾಗಿ

ಭೂಸ್ವಾಧೀನಪಡಿಸಿಕೊಳ್ಳಲು ಅಗತ್ಯವಾಗಿ ಬೇಕಾಗಿದೆ ಎಂದು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಪತ್ರದ ಕ್ರಮಾಂಕ: ಎಲ್ಎಕ್ಯು ಎಸ್ಆರ್ 5:07–08, ದಿನಾಂಕ: 21.11.2007 ಮೇರೆಗೆ ಕರ್ನಾಟಕ ರಾಜ್ಯಪತ್ರದ ದಿನಾಂಕ: 21.2.2008 ರಂದು ಪ್ರಕಟಿಸಲಾಗಿರುವ ಕಾಯ್ದೆ ಕಲಂ 4(1)ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದ 1961ನೇ ಸಾಲಿನ ಕರ್ನಾಟಕ ಅಧಿನಿಯಮ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ 5ಎ (2) ಪ್ರಕರಣದ ಮತ್ತು 6(ಅ) ಪ್ರಕರಣದ ಮೇರೆಗೆ ವಿಶೇಷ ಜಿಲ್ಲಾಧಿಕಾರಿಯವರು ಮೇಲೆ ಹೇಳಿದ ಉದ್ದೇಶಕ್ಕಾಗಿ ಸದರಿ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಸದರಿ ಭೂ ಸಂಗ್ರಹಣಾ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಅಗತ್ಯವಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂ ಸಂಗ್ರಹಣಾ ಅಧಿನಿಯಮ 3ನೇ ಪ್ರಕರಣ (ಸಿ) ಖಂಡದ ಮೇರೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–01 ಇವರನ್ನು ಸದರಿ ಜಮೀನುಗಳ ಬಗ್ಗೆ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಯವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಈ ಮೂಲಕ ನಿಯಮಿಸಲಾಗಿದೆ ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನುಗಳ ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–1 ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಬೆಂಗಳೂರು** **ತಾಲ್ಲೂಕು: ಆನೇಕಲ್** **ಹೋಬಳಿ: ಜಿಗಣಿ** **ಗ್ರಾಮ: ಮಹಾಂತಲಿಂಗಪುರ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನಕ್ಕೆ ಬೇಕಾದ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ. | ಆಕಾರ |
| 1 | ಎ. ವಿಜಯನ್, ಲಕ್ಷ್ಮೀನಾರಾಯಣ ಬಿನ್ ಬಾಲಪ್ಪ, ಟಿ.ವಿ.ಬಿ. ಪ್ರಕಾಶ್ ಬಿನ್ ವೀರಣ್ಣ, ಪುಟ್ಟಣ್ಣ ಬಿನ್ ಚಿಕ್ಕೀರಪ್ಪ, ವಿ.ಮುನಿರಾಜು ಬಿನ್ ಲೇಟ್ ವೆಂಕಟಪ್ಪ | ಎ. ವಿಜಯನ್ ಲಕ್ಷ್ಮೀನಾರಾಯಣ ವೆಂಕಟಪ್ಪ ಚೌಡಾಚಾರಿ ಲಕ್ಷ್ಮೀನಾರಾಯಣ ಲಕ್ಷ್ಮೀನಾರಾಯಣ ಪುಟ್ಟಮ್ಮ ಬಿ.ಮುನಿರಾಜು | 2 | ಖುಷ್ಕಿ | ಸ.ನಂ:2ರ ಉಳಿಕೆ | ಸ.ನಂ:2ರ ಉಳಿಕೆ | ಗಡಿ | ಸನಂ 4 | 0–15 | 0–45 |
| 2 | ಆರ್. ವೆಂಕಟೇಶ್ ಬಿನ್ ರಾಮಚಂದ್ರರೆಡ್ಡಿ, ಶಾರದಮ್ಮ ಬಿನ್ ದೊಡ್ಡಮುನಿಯಪ್ಪ | ಆರ್. ವೆಂಕಟೇಶ್ ಶಾರದಮ್ಮ | 4 | ಖುಷ್ಕಿ | ಸ.ನಂ.4ರ ಉಳಿಕೆ | ಸ.ನಂ.4ರ ಉಳಿಕೆ | ಸ.ನಂ.2 | ಸ.ನಂ.7:5 | 0–20 | 0–60 |
| 3 | ನಾರಾಯಣಪ್ಪ ಬಿನ್ ಹನುಮಂತಯ್ಯ ವಿಜಯಮ್ಮ ಕೋಂ ನಾರಾಯಣಪ್ಪ | ನಾರಾಯಣಪ್ಪ ವಿಜಯಮ್ಮ | 7:5 | ಖುಷ್ಕಿ | ಸನಂ7:5 ರ ಉಳಿಕೆ | ಸನಂ 7:5ರ ಉಳಿಕೆ | ಸನಂ 4 | ಸನಂ 7:7 | 0–04 | 0–15 |
| 4 | ವೆಂಕಟಪ್ಪ ದೊಡ್ಡೀಯಪ್ಪ | ವೆಂಕಟಪ್ಪ ದೊಡ್ಡಯ್ಯ ದೊಡ್ಡೀಯಪ್ಪ | 7:7 | ಖುಷ್ಕಿ | ಸನಂ 7:7 ರ ಉಳಿಕೆ | ಸನಂ 7:7ರ ಉಳಿಕೆ | ಸನಂ7:5 | ಸನಂ 8 | 0–04 | 0–15 |
| | | | | | | | | **ಒಟ್ಟು** | **1–03** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 161